CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜುಲೈ ೧೪, ೨೦೦೫ (ಆಷಾಢ ೨೩, ಶಕ ವರ್ಷ ೧೯೨೭) | ಸಂಚಿಕೆ ೨೮ |
|---|---|---|


## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ತೋಟಗಾರಿಕೆ ಉಪ ನಿರ್ದೇಶಕರವರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1.**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ತೋಉನಿ:ಕಉ:ವಿ2: 4 :05-06 ದಿನಾಂಕ: 4ನೇ ಜುಲೈ 2005.**

**ವಿಷಯ:** ಕಬ್ಬನ್ ಉದ್ಯಾನವನದ ರಸ್ತೆಗಳಲ್ಲಿ ಕಸ ಕಡ್ಡಿ ಹಾಗೂ ಮರದ ಕೆಳಗೆ ಬಿದ್ದಿರುವ ಎಲೆಗಳು ಹಾಗೂ ಪ್ಲಾಸ್ಟಿಕ್ ಚೀಲ ಇತ್ಯಾದಿ ತ್ಯಾಜ್ಯ ವಸ್ತುಗಳನ್ನು ಗುಡಿಸಿ ಸ್ವಚ್ಚ ಮಾಡುವ ಬಗ್ಗೆ.

ಕಬ್ಬನ್ ಉದ್ಯಾನವನ ಹಾಗೂ ಸುತ್ತ ಮುತ್ತಲಿನ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಕಸ ಗುಡಿಸಿ ಸ್ವಚ್ಚತೆ ಮಾಡಿಸಲು 2005-06ನೇ ಸಾಲಿಗೆ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಇಚ್ಚಿಸುವವರು ಪ್ರತಿ ಮಾಹೆಗೆ ತಗಲುವ ವೆಚ್ಚ ದರ ಸೂಚಿಸಲು ತಿಳಿಸಿದೆ.

| ವಿವರಗಳು | ವಿಸ್ತೀರ್ಣ | ಮಾಹೆಯಾನ ದರ |
|---|---|---|
| ಕಬ್ಬನ್ ಉದ್ಯಾನವನದಲ್ಲಿ ಬರುವ ರಸ್ತೆಗಳು ಅನುಬಂಧ-1 ರಲ್ಲಿ ತಿಳಿಸಿರುವ ವಿವರಗಳಂತೆ ಕಸ ಕಡ್ಡಿಗಳನ್ನು ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯವಸ್ತುಗಳನ್ನು ಗುಡಿಸಿ ಸ್ವಚ್ಚ ಮಾಡುವುದು. ಸಿದ್ದಲಿಂಗಯ್ಯ ಸರ್ಕಲ್, ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್ , ಸೆಂಚುರಿ ಕ್ಲಬ್ ಹತ್ತಿರ ಎಲೆ ಕಸ ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಗುಡಿಸಿ ತೆಗೆಸುವುದು. | ಅನುಬಂಧ-1 ರಲ್ಲಿ ನಮೂದಿಸಿದಂತೆ | |

1. ಟೆಂಡರ್ ಫಾರಂಗಳನ್ನು ಪಡೆಯುವ ದಿನಾಂಕ : 23-7-2005 ರಿಂದ 27-7-2005ರ ಸಂಜೆ 5.00 ಗಂಟೆಯವರೆಗೆ
2. ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ : 28-7-2005 ಸಂಜೆ 4.00 ಗಂಟೆಯವರೆಗೆ
3. ಟೆಂಡರ್‌ಗಳನ್ನು ತೆರೆಯುವ ದಿನಾಂಕ : 28-7-2005 ಸಂಜೆ 5.00 ಗಂಟೆಗೆ
4. ಟೆಂಡರ್ ಫಾರಂ ಬೆಲೆ : ರೂ. 500-00 (ಐದು ನೂರು ಮಾತ್ರ)

ಹೆಚ್ಚಿನ ಮಾಹಿತಿಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರುರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು-1.

**ನಿಬಂಧನೆ ಮತ್ತು ಷರತ್ತುಗಳು**

1. ಟೆಂಡರ್ ಫಾರಂನ್ನು ದಿನಾಂಕ: 23-7-2005ರಿಂದ 27-7-2005 ರವರೆಗೆ ಕಛೇರಿ ಕೆಲಸದವೇಳೆಯಲ್ಲಿ ಪಡೆಯಬಹುದು. ಟೆಂಡರ್ ಫಾರಂ ಬೆಲೆ ರೂ.500=00
2. ಟೆಂಡರ್ ಜೊತೆಯಲ್ಲಿ ರೂ.50000=00 ಗಳ ಡಿಮ್ಯಾಂಡ್ ಡ್ರಾಫ್ಟನ್ನು ಲಗತ್ತಿಸಬೇಕು ಡಿಮ್ಯಾಂಡ್ ಡ್ರಾಫ್ಟನ್ನು ತೋಟಗಾರಿಕೆ ನಿರ್ದೇಶಕರು, ಹಾಗೂ ಸದಸ್ಯ ಕಾರ್ಯದರ್ಶಿಗಳು ಬೆಂಗಳೂರು ಗಾರ್ಡನ್ ಟ್ರಸ್ಟ್, ಬೆಂಗಳೂರು ರವರಿಗೆ ಪಾವತಿಯಾಗುವಂತೆ ಬೆಂಗಳೂರಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದಿರಬೇಕು
3. ಮೊಹರಾದ ಟೆಂಡರ್‌ಗಳನ್ನು ದಿನಾಂಕ: 28-7-2005 ರಂದು ಸಂಜೆ4.00ಗಂಟೆಯವರೆಗೆ ಸ್ವೀಕರಿಸಲಾಗುವುದು ನಿಗಧಿಯಾದ ವೇಳೆಯ ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

4. ಮೊಹರಾದ ಟೆಂಡರ್ ಗಳನ್ನು ದಿನಾಂಕ 28-7-2005 ರಂದು ಸಂಜೆ 5.00 ಗಂಟೆಗೆ ಕೆಳಸಹಿದಾರರ ಕಛೇರಿಯಲ್ಲಿ ಟೆಂಡರ್ ದಾರರ ಸಮ್ಮುಖದಲ್ಲಿ ತೆರೆಯಲಾಗುವುದು, ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಮತ್ತು ಸ್ವೀಕರಿಸುವ ಪೂರ್ಣಅಧಿಕಾರವು ತೋಟಗಾರಿಕೆ ನಿರ್ದೇಶಕರದೇ ಅಂತಿಮವಾಗಿರುತ್ತದೆ. ಹೆಚ್ಚಿನ ವಿವರಗಳನ್ನು ಕಛೇರಿ ವೇಳೆಯಲ್ಲಿ ಪಡೆಯಬಹುದು.
5. ಟೆಂಡರ್ ಗಳನ್ನು ಕೊಡುವಾಗ ಸೀಲ್ ಮಾಡಿರಬೇಕು ಮತ್ತು ಲಕೋಟೆಯ ಮೇಲೆ ಕಬ್ಬನ್ ಉದ್ಯಾನವನದ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಸ್ವಚ್ಚತೆ ಮಾಡಿಸುವ ಬಗ್ಗೆ ಟೆಂಡರ್ ಎಂದು ಬರೆದಿರಬೇಕು.
6. ಟೆಂಡರ್ ಜೊತೆಯಲ್ಲಿ ಠೇವಣಿ ಹಣ ರೂ.50,000=00 ಗಳ ಡಿ.ಡಿ. ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7. ಕಬ್ಬನ್ ಉದ್ಯಾನವನದ ಒಳಗಡೆ (ಅನುಬಂಧ-1 ರಲ್ಲಿ ಲಗತ್ತಿಸಿದ ವಿವರದ ರೀತಿ) ಇರುವ ರಸ್ತೆಗಳನ್ನು ಪ್ರತಿನಿತ್ಯ ಹೊರ ಮತ್ತು ಒಳಗೆ ಸ್ವಚ್ಚವಾಗಿ ಗುಡಿಸಬೇಕು ಇದಕ್ಕೆ ಕೆಲಸಗಾರರನ್ನು ನೇಮಕಾತಿ ಮಾಡಿದ ವಿವರಗಳನ್ನು ಸಂಬಂಧಿಸಿದ ಗುತ್ತಿಗೆದಾರರು ಸಹಾಯಕ ತೋಟಗಾರಿಕೆ ಅಧಿಕಾರಿ, ಕಬ್ಬನ್ ಉದ್ಯಾನವನ ಹಾಗೂ ಶೇಷಾದ್ರಿ ವಿಭಾಗ ರವರ ಪರಿಶೀಲನೆಗೆ ಒದಗಿಸಬೇಕು ಹಾಗೂ ಅವರಿಂದ ಪ್ರತಿ ತಿಂಗಳು ತೃಪ್ತೀಕರಣ ಧೃಢೀಕರಣ ಪಡೆಯತಕ್ಕದ್ದು.
8. ಕಬ್ಬನ್ ಉದ್ಯಾನವನದಲ್ಲಿ ಬರುವ ಸಿದ್ದಲಿಂಗಯ್ಯ ಸರ್ಕಲ್ , ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್, ಸೆಂಚುರಿ ಕ್ಲಬ್ ಹತ್ತಿರ ಹಾಗೂ ಅನುಬಂಧ-1 ರಲ್ಲಿ ವಿವರಿಸಿದ ರಸ್ತೆಗಳಲ್ಲಿ ಸ್ವಚ್ಚತೆ ಹಾಗೂ ಮರದ ಕೆಳಗೆ ಹಾಗೂ ಹುಲ್ಲುಹಾಸಿನ ಮೇಲೆ ಬಿದ್ದಿರುವ ಕಸ ಕಡ್ಡಿಗಳನ್ನು ನಿಗದಿಪಡಿಸಿದ ಕಾಂಪೋಸ್ಟ್ ಗುಂಡಿಗೆ ಸಾಗಿಸಬೇಕು ಹಾಗೂ **ಪ್ಲಾಸ್ಟಿಕ್** ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಸ್ವಂತ ವಾಹನದಲ್ಲಿ ದೂರ ಸಾಗಿಸಬೇಕು.
9. ಈ ಗುತ್ತಿಗೆ ಕೆಲಸವನ್ನು ನಿರ್ವಹಿಸಿದ 2 ವರ್ಷದ ಅವಧಿಗೆ ಧೃಡೀಕರಣ ಪತ್ರವನ್ನು ನೀಡಬೇಕು.
10. ಯಶಸ್ವಿ ಟೆಂಡರ್ ದಾರರು ಟ್ರಿಪರ್ ಲಾರಿ ಅಥವಾ ಟ್ರ್ಯಾಕ್ಟರ್ ಹೊಂದಿರತಕ್ಕದ್ದು ಮತ್ತು ವಾಹನದ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ಹೊಂದಿರತಕ್ಕದ್ದು.
11. ಕಳೆದ ಸಾಲಿನ ಆದಾಯದ ಧೃಢೀಕರಣ ಪತ್ರವನ್ನು ಲಗತ್ತಿಸಬೇಕು.
12. ಕನಿಷ್ಟ 5.00 ಲಕ್ಷಗಳ ಬ್ಯಾಂಕ್ ಸಾಲ್ವೆನ್ಸಿ ಲಗತ್ತಿಸಿರಬೇಕು
13. ಯಶಸ್ವಿ ಟೆಂಡರ್ ದಾರರು ವಾರ್ಷಿಕ ಗುತ್ತಿಗೆ ಕೆಲಸವನ್ನು ನಿರ್ವಹಿಸಲು ನಮೂದಿಸಿದ ಟೆಂಡರ್ ಮೊತ್ತವನ್ನು 12 ಸಮ ಕಂತುಗಳಲ್ಲಿ ಪ್ರತಿ ತಿಂಗಳು ಕೆಲಸ ತೃಪ್ತಿಕರವಾಗಿ ನಿರ್ವಹಿಸಿದ ನಂತರ ಹಣ ಪಾವತಿಗೆ ಕ್ರಮ ಜರುಗಿಸಲಾಗುವುದು ಹಾಗೂ ನಿಯಮದಂತೆ ಸಾಲದ ಬಿಲ್ಲಿನಲ್ಲಿ ಅನ್ವಯವಾಗುವ ತೆರಿಗಗಳನ್ನು ಕಟಾಯಿಸಲಾಗುವುದು.
14. ಯಶಸ್ವಿ ಟೆಂಡರ್ ದಾರರು ಗುತ್ತಿಗೆ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ಒಪ್ಪಿರುವ ಬಗ್ಗೆ ರೂ.200=00 ಛಾಪಾ ಕಾಗದದ ಮೇಲೆ ಕರಾರು ಬರೆದು ಕೊಡಬೇಕು
15. ಈ ಕಛೇರಿಯಿಂದ ಸದರಿ ಗುತ್ತಿಗೆಯನ್ನು ನಿರ್ವಹಿಸಲು ಆದೇಶ ಪಡೆದ ದಿನಾಂಕ ನಿಗಧಿತ ಅವಧಿಯ ನಂತರ ಯಾವುದೇ ಕಾರಣಕ್ಕೂ ಗುತ್ತಿಗೆಯ ಅವಧಿಯನ್ನು ಮುಂದುವರಿಸಲು ಸಾಧ್ಯವಿರುವುದಿಲ್ಲ.
16. ಸದರಿ ಗುತ್ತಿಗೆ ಕೆಲಸವನ್ನು ಕಳಪೆಯಾಗಿ ನಿರ್ವಹಣೆ ಮಾಡಿದಲ್ಲಿ ಗುತ್ತಿಗೆ ಕರಾರನ್ನು ರದ್ದುಪಡಿಸಿ, ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು, ಹಾಗೂ ಕಾನೂನಿನಡಿಯಲ್ಲಿ ಕ್ರಮ ಜರುಗಿಸಿ ದಂಡ ವಿಧಿಸಲಾಗುತ್ತದೆ.
17. ಕೆಲಸ ತೃಪ್ತಿಕರವಾಗಿಲ್ಲದಿದ್ದಲ್ಲಿ ಗುತ್ತಿಗೆಯ ಅವಧಿಯನ್ನು ಯಾವುದೇ ಕಾರಣ ನೀಡದೇ ತೋಟಗಾರಿಕೆ ನಿರ್ದೇಶಕರು ರದ್ದುಪಡಿಸುವ ಅಧಿಕಾರ ಹೊಂದಿರುತ್ತಾರೆ.
18. ತೋಟಗಾರಿಕೆ ನಿರ್ದೇಶಕರು, ತೋಟಗಾರಿಕೆ ಉಪ ನಿರ್ದೇಶಕರು, ತುರ್ತು ಸಂದರ್ಭದಲ್ಲಿ ಸ್ವಚ್ಚತೆ ಬಗ್ಗೆ ನೇಮಿಸುವ ಕೆಲಸವನ್ನು ಸಹ ನಿರ್ವಹಿಸುವುದು.
19. ಮಹಾನಗರ ಪಾಲಿಕೆಯಿಂದ ಸದರಿ ಸ್ವಚ್ಚತಾ ಕೆಲಸವನ್ನು ಪ್ರಾರಂಭ ಮಾಡಿದ ದಿನದಂದೇ ಆದೇಶವು ತಾನಾಗಿಯೇ ರದ್ದಾಗುತ್ತದೆ ಎಂದು ಭಾವಿಸತಕ್ಕದ್ದು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು-1.

ಪಿ.ಆರ್. 382

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 82 ಡಿಟಿಎಂ 2005 ಬೆಂಗಳೂರು, ದಿನಾಂಕ: 05ನೇ ಜುಲೈ 2005.**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ವಿವಿಧ ಕಚೇರಿಗಳ ಉಪಯೋಗಕ್ಕಾಗಿ ಈ ಕೆಳಕಂಡ ವಿವಿಧ ಮಾದರಿಯ ಕಾಪಿಯರ್ ಪೇಪರ್‌ಗಳನ್ನು ತಯಾರಕರಿಂದ ಅಥವಾ ಅವರ ಅಧಿಕೃತ ಮಾರಾಟಗಾರರಿಂದ ಆಗ್ಗಿಂದಾಗ್ಗೆ ಅಗತ್ಯಕ್ಕೆ ತಕ್ಕ ಪರಿಮಾಣದಲ್ಲಿ ಖರೀದಿಸಲು ಉದ್ದೇಶಿಸಲಾಗಿದೆ. ಸುಮಾರು ರೂ. 6,50,000.00 ಮೌಲ್ಯದ ಕಾಪಿಯರ್ ಪೇಪರ್‌ಗಳನ್ನು ಒಂದು ವರ್ಷದ ಅವಧಿಯಲ್ಲಿ ಖರೀದಿಸುವ ಸಾಧ್ಯತೆ ಇರುತ್ತದೆ. ಈ ಸಂಬಂಧ ತಯಾರಕರು ಅಥವಾ ಅವರ ಅಧಿಕೃತ ಮಾರಾಟಗಾರರಿಂದ ಕಾಪಿಯರ್ ಪೇಪರ್‌ಗಳಿಗೆ ದರಗಳನ್ನು ನಿಗಧಿಪಡಿಸಲು ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

1. A 4 Size (210mm X 297mm)
2. A 3 Size (297mm X 420mm)
3. Full Scape Size (215mm X 345 mm)

ಇಚ್ಛೆಯುಳ್ಳವರು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ ಲೆಕ್ಕಪತ್ರ ಕೊಠಡಿ ಸಂಖ್ಯೆ: 25, ನೆಲಮಹಡಿ, ವಿಧಾನಸೌಧ ಇಲ್ಲಿ ರೂ. 100–00 + 12.50 ರಂತೆ ಮಾರಾಟ ತೆರಿಗೆ ಅಂದರೆ ಒಟ್ಟು ರೂ. 114.00 ಯನ್ನು ನಗದು ಅಥವಾ ಡಿಮ್ಯಾಂಡ್

ಡ್ರಾಫ್ಟ್ ರೂಪದಲ್ಲಿ ನೀಡಿ ರಸೀದಿಯನ್ನು ಪಡೆದು ಅನಂತರ ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಕಾರ್ಯಕಾರಿ- 1) ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಇಲ್ಲಿ ರಸೀದಿಯನ್ನು ತೋರಿಸಿ ಪಡೆದುಕೊಳ್ಳಬಹುದು. ದಿ: 04-08-2005 ರಂದು ಮಧ್ಯಾಹ್ನ 3:30 ಗಂಟೆಯವರೆಗೆ ಟೆಂಡರ್ ಅರ್ಜಿಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 05-08-2005 ರಂದು ಮಧ್ಯಾಹ್ನ 3:30 ಗಂಟೆ ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲಿಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು - 560 001 ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 06-08-2005 ರಂದು ಮಧ್ಯಾಹ್ನ 4.30 ಗಂಟೆಗೆ ತೆರೆಯಲಾಗುವುದು. ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1) ಟೆಂಡರ್ ಅರ್ಜಿಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2) ಮುಂಗಡ ಠೇವಣಿ (ಇ.ಎಂ.ಡಿ) ಮೊತ್ತ ರೂ. 5,000-00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿ.ಆ.ಸು.ಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು - 560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು. ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3) ದರಪಟ್ಟಿಯೊಂದಿಗೆ **ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53 ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.**
4) ಸರಬರಾಜು ಮಾಡುವ ಸಾಮಗ್ರಿಗಳಿಗೆ 90 ದಿನಗಳವರೆಗಿನ ದರ ಸಿಂಧುತ್ವ ಇರಬೇಕು.

ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1) ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22092440 ಅಥವಾ 22092487 ರಲ್ಲಿ ಸಂಪರ್ಕಿಸಬಹುದು.

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ - 1)

**ಟೆಂಡರ್ ನಮೂನೆ**

ಟೆಂಡರ್ ನಮೂನೆ ಸಂಖ್ಯೆ:

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದ ವಿವಿಧ ಕಚೇರಿಗಳ ಉಪಯೋಗಕ್ಕಾಗಿ ಕಾಪಿಯರ್ ಪೇಪರ್‌ಗಳನ್ನು ಖರೀದಿಸುವ ಬಗ್ಗೆ.

| | | |
|---|---|---|
| ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ | : | ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ - 1) ಕೊಠಡಿ ಸಂಖ್ಯೆ:23, ನೆಲಮಹಡಿ, ವಿಧಾನಸೌಧ, ಬೆಂಗಳೂರು - 560 001. |
| ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ | : | 05-08-2005 ಮಧ್ಯಾಹ್ನ 3:30 ಗಂಟೆಯೊಳಗೆ |
| ಟೆಂಡರ್ ತೆರೆಯುವ ದಿನಾಂಕ | : | 06-08-2005 ಮಧ್ಯಾಹ್ನ 4:30 ಗಂಟೆಗೆ ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು. |
| ಟೆಂಡರ್ ಅರ್ಜಿ ದರ | : | ರೂ. 100.00 + ಶೇಕಡ 12.5 ಮಾರಾಟ ತೆರಿಗೆ (ಒಂದು ನೂರ ಹದಿನಾಲ್ಕು ರೂಪಾಯಿ ಮಾತ್ರ) |

**ಟೆಂಡರ್‌ದಾರರ ಗಮನಕ್ಕೆ:**

1) ಟೆಂಡರ್ ಲಕೋಟೆಯ ಮೇಲೆ **"ಕಾಪಿಯರ್ ಪೇಪರ್‌ಗಳ ದರಪಟ್ಟಿ"** ಎಂದು ಹಾಗೂ ಟೆಂಡರ್ ಪ್ರಕಟಣೆಯ ಸಂಖ್ಯೆ, ದಿನಾಂಕ ಕಡ್ಡಾಯವಾಗಿ ನಮೂದಿಸಬೇಕು.
2) ದರಗಳನ್ನು ಇದರೊಂದಿಗೆ ಲಗತ್ತಿಸಿರುವ ನಮೂನೆಯಲ್ಲಿಯೇ ನೀಡತಕ್ಕದ್ದು.
3) ನಮೂದಿಸುವ ದರವು ತೆರಿಗೆ, ಸಾಗಾಣಿಕೆ ಇತ್ಯಾದಿಗಳನ್ನು ಒಳಗೊಂಡಿರಬೇಕು.
4) ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53 ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.
5) ಟೆಂಡರ್‌ನ್ನು ಅನುಮೋದಿಸಿದಲ್ಲಿ ಟೆಂಡರ್‌ದಾರರು ಗೊತ್ತುಪಡಿಸಿರುವ ದರದಲ್ಲಿಯೇ ಗೊತ್ತು ಪಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಒದಗಿಸಲು ಬದ್ಧರಿರಬೇಕು.
6) ತಯಾರಕರು ಅಥವಾ ಅವರ ಅಧಿಕೃತ ಮಾರಾಟಗಾರರ ಬಗ್ಗೆ ದಾಖಲೆ ಒದಗಿಸುವುದು. ಹಾಗೂ ದರಪಟ್ಟಿ ನೀಡುವ ಜೆರಾಕ್ಸ್ ಕಾಗದಗಳ Make ನಮೂದಿಸಬೇಕು ಮತ್ತು **ಮಾದರಿಗಳನ್ನು ಒದಗಿಸುವುದು.**

7) ಒದಗಿಸುವ ಸಾಮಗ್ರಿಗಳು ದೋಷದಿಂದ ಕೂಡಿದ್ದಲ್ಲಿ ಕೂಡಲೇ ಬದಲಾಯಿಸಲು ಬದ್ಧರಿರಬೇಕು. ಇಲ್ಲದಿದ್ದಲ್ಲಿ ಅದನ್ನು ತಿರಸ್ಕರಿಸಲಾಗುವುದು.

8) ಪ್ರತಿ ತಿಂಗಳಲ್ಲಿ ಎಷ್ಟು ಮೌಲ್ಯದ ಕಾಪಿಯರ್ ಪೇಪರ್‌ಗಳನ್ನು ಸರಬರಾಜು ಮಾಡಲು ಸಾಧ್ಯ ಎಂದು ಸೂಚಿಸುವುದು.

9) ಸಾಮಗ್ರಿಗಳನ್ನು ಒದಗಿಸುವಂತೆ ಪತ್ರ ಬರೆದ 07 ದಿನಗಳೊಳಗಾಗಿ ಒದಗಿಸಲು ಬದ್ಧರಿರಬೇಕು.

10) ಮುಂಗಡ ಠೇವಣಿ (ಇ.ಎಂ.ಡಿ) ಮೊತ್ತ ರೂ. 5,000-00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿ.ಆ.ಸು.ಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು – 560 001 ಇವರಿಗೆ ಸಂಬೋಧಿಸಿ ಲಗತ್ತಿಸತಕ್ಕದ್ದು.

11) ಯಶಸ್ವಿ ಟೆಂಡರ್‌ದಾರರು ಸಾಮಗ್ರಿಗಳ ಒಟ್ಟು ಮೌಲ್ಯದ ಶೇಕಡ 5 ರಷ್ಟು ಭದ್ರತಾ ಠೇವಣಿಯನ್ನು ಡಿ.ಡಿ.ರೂಪದಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿ.ಆ.ಸು.ಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು – 560 001 ಇವರಿಗೆ ಸಂಬೋಧಿಸಿ ಲಗತ್ತಿಸತಕ್ಕದ್ದು.

12) ಯಶಸ್ವಿ ಟೆಂಡರ್‌ದಾರರ ಇ ಎಂ ಡಿ ಮೊತ್ತವನ್ನು ಅವಧಿ ಮುಗಿದ ನಂತರ ಯಾವುದೇ ದೂರು ಇಲ್ಲದಿದ್ದಲ್ಲಿ ಹಾಗೂ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಸ್ಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

13) ಆಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

14) ಟೆಂಡರ್‌ಗಳನ್ನು ದಿನಾಂಕಃ 05-08-2005 ರಂದು ಮಧ್ಯಾಹ್ನ 3ಃ30 ಗಂಟೆಯೊಳಗೆ ಸಿ.ಆ.ಸು.ಇ (ಕಾರ್ಯಕಾರಿ) ಕೊಠಡಿ ಸಂಖ್ಯೆಃ 23, ನೆಲಮಹಡಿ, ವಿಧಾನಸೌಧ, ಬೆಂಗಳೂರು – 560 001 ಈ ಕಛೇರಿಗೆ ಸಲ್ಲಿಸತಕ್ಕದ್ದು, ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

15) ದರಪಟ್ಟಿಯೊಂದಿಗೆ ಠೇವಣಿಯನ್ನು (ಇ.ಎಂ.ಡಿ) ಮೊತ್ತ ನೀಡದಿದ್ದಲ್ಲಿ ಮತ್ತು ಮೇಲಿನ ಅಂಶಗಳಿಗೆ ಪೂರ್ಣ ವಿವರವನ್ನು ನೀಡದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಯಾವುದೇ ಕಾರಣವನ್ನು ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ – 1)

**ಅನುಬಂಧ**

ಟೆಂಡರ್ ಪ್ರಕಟಣೆಯ ಸಂಖ್ಯೆಃ
ಸಿಆಸುಇ 82 ಡಿಟಿಎಂ 2005

ಕಾಪಿಯರ್ ಪೇಪರ್‌ಗಳ ಸರಬರಾಜು

| ಕ್ರ. ಸಂ. | ಸಾಮಗ್ರಿಗಳ ವಿವರ | ದರ (ಒಂದಕ್ಕೆ) ರೂ. | ಶೇಕಡವಾರು ಕರ್ನಾಟಕ ಮಾರಾಟ ತೆರಿಗೆ | ಶೇಕಡವಾರು ಕೇಂದ್ರ ಮಾರಾಟ ತೆರಿಗೆ |
|---|---|---|---|---|
| 1 | A 4 Size (210mm X 297mm) | | | |
| 2 | A 3 Size (297mm X 420mm) | | | |
| 3 | Full Scape Size (215mm X 345 mm) | | | |

ಟೆಂಡರ್‌ದಾರರ ಸಹಿ
(ಪೂರ್ಣ ಹೆಸರು ವಿಳಾಸ ಮೊಹರಿನೊಂದಿಗೆ)

**ಹೆಚ್.ಕೆ. ರವಿಮೂರ್ತಿ**
ಪಿ.ಆರ್. 383
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ – 1)

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ರಾಜ್ಯವಲಯ, ಬೆಂಗಳೂರು (ಗ್ರಾ) ಕಬ್ಬನ್ ಉದ್ಯಾನವನ**

**ಸಂಖ್ಯೆ:ಹಿಸತೋನಿ:ರಾವ:ಬೆಂಗ್ರಾ:ತಾಸ:28:05-06, ದಿನಾಂಕ: 4ನೇ ಜುಲೈ 2005**

**ಸೀಬೆ ಪಸಲಿನ ವಿಲೇವಾರಿಗೆ ಟೆಂಡರ್ ಪ್ರಕಟಣೆ**

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ರಾಜ್ಯವಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ ರವರ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಕ್ಷೇತ್ರಗಳ ಸೀಬೆ ಫಸಲನ್ನು 2005ನೇ ಸಾಲಿನ 2ನೇ ಅವಧಿಗೆ ವಿಲೇವಾರಿ ಮಾಡಲು ಇಲಾಖೆಯ ಪರಿಷ್ಕೃತ

ನಿಯಮಾವಳಿ ಪ್ರಕಾರ ಟೆಂಡರ್ ಪ್ರಕಟಣೆಯನ್ನು ಹೊರಡಿಸಿದೆ. ಟೆಂಡರ್ ಪ್ರಕ್ರಿಯೆಯನ್ನು ಈ ಕೆಳಗಿನಂತೆ ತಿಳಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ರಾಜ್ಯವಲಯ, ಕಬ್ಬನ್ ಪಾರ್ಕ್, ಬೆಂಗಳೂರು ರವರ ಕಛೇರಿಯಲ್ಲಿ ನಡೆಸಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ವ್ಯಾಪಾರಸ್ಥರು ಸದರಿ ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರದ ಹೆಸರು | ಫಸಲು | ಗಿಡಗಳ ಸಂಖ್ಯೆ | ಫಸಲನ್ನು ರೂಢಿಸಿ ಕೊಳ್ಳುವ ಕೊನೆಯ ದಿನಾಂಕ | ಠೇವಣಿ ಮೊತ್ತ ರೂ. | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ನಡೆಸುವ ದಿನಾಂಕ ಮತ್ತು ವೇಳೆ |
|---|---|---|---|---|---|---|---|
| 1. | ತಿಪ್ಪಗೊಂಡನಹಳ್ಳಿ ಕ್ಷೇತ್ರ ನೆಲಮಂಗಲ ತಾಲ್ಲೂಕು | ಸೀಬೆ | 1625 | 31.12.05 | 2000 | 20.7.05 3 ಗಂಟೆ | 20.7.05 3.30 ಗಂಟೆ |
| 2. | ಬಗಿನಿಗೆರೆ ಕಾವಲ್ ಕ್ಷೇತ್ರ ಮಾಗಡಿ ತಾಲ್ಲೂಕು | ಸೀಬೆ | 2350 | 31.12.05 | 2000 | 21.7.05 3 ಗಂಟೆ | 21.7.05 3.30 ಗಂಟೆ |

ಟೆಂಡರ್ ಫಾರಂಗಳನ್ನು 25.00 ರೂ ಪಾವತಿ ಮಾಡಿ ಈ ಕಛೇರಿ ಅಥವಾ - ಆಯಾಯ ಕ್ಷೇತ್ರಗಳಲ್ಲಿ ಪಡೆಯಬಹುದು. ಟೆಂಡರ್‌ದಾರರು ಫಸಲಿಗೆ ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸುವ ಟೆಂಡರ್ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ರಾಜ್ಯವಲಯ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಪಾರ್ಕ್, ಬೆಂಗಳೂರು ಅಥವಾ ಆಯಾಯ ಕ್ಷೇತ್ರಾಧಿಕಾರಿಯ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಫಾರಂನಲ್ಲಿ ಟೆಂಡರ್‌ದಾರರು ತಾವು ದಾಖಲಿಸಿರುವ ಮೊತ್ತವನ್ನು ಕಡ್ಡಾಯವಾಗಿ ನಮೂದಿಸಿ ತಮ್ಮ ಹೆಸರು ವಿಳಾಸಗಳನ್ನು ಭರ್ತಿ ಮಾಡಿರಬೇಕು. ಇಲ್ಲದಿದ್ದಲ್ಲಿ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ನಿಗದಿಪಡಿಸಿದ ದಿನಾಂಕ ಮತ್ತು ವೇಳೆಗೆ ಅಥವಾ ಅದಕ್ಕೂ ಮೊದಲು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ರಾಜ್ಯವಲಯ, ಬೆಂಗಳೂರು ಜಿಲ್ಲೆ, ಕಬ್ಬನ್ ಪಾರ್ಕ್ ರವರ ಕಛೇರಿಯಲ್ಲೇ ಸಲ್ಲಿಸಬೇಕು.

ಮೇಲಿನ ತೋಟಗಾರಿಕೆ ಕ್ಷೇತ್ರಗಳ ಫಸಲನ್ನು ಟೆಂಡರ್ ಅನುಮೋದನೆಯಾದ ದಿನಾಂಕದಿಂದ 10 ದಿನದೊಳಗಾಗಿ ಪೂರ್ಣ ಮೊಬಲಗನ್ನು ಪಾವತಿ ಮಾಡಿ ಫಸಲನ್ನು ರೂಢಿಸಿಕೊಳ್ಳಬಹುದು. ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರಗಳನ್ನು ನಿಬಂಧನೆ ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
ಪಿ.ಆರ್. 385 ರಾಜ್ಯವಲಯ, ಕಬ್ಬನ್ ಪಾರ್ಕ್, ಬೆಂಗಳೂರು

**WATER RESOURCES (MINOR IRRIGATION) DEPARTMENT**
**Office of the Executive Engineer, M.I.Division, Belgaum**
**Tender Notification (Two Cover System)**
**No/MID/BGM/JE/TENDER/05-06/1408, Dated:20th June 2005**

Sealed Tenders in duplicate in two cover system for the following works are invited on behalf of Governor of Karnataka from the Contractors Registered with KPWD of Karnataka State. The Tenders will be received on 4.8.2005 up to 4.00 P.M. I.S.T., at the office of,

(i) Executive Engineer Minor Irrigation Division, Belgaum.
(ii) Superintending Engineer Minor Irrigation Circle, Belgaum.
(iii)Chief Engineer, Minor Irrigation (North) Bijapur.

Part I of the tender will be opened (if possible) on 4.8.2005 The last date of receipt of application forms for the work is 18.7.2005. The cost of blank tender forms shall be paid in the form of DD/Bankers Cheque/Cash. The same is not refundable.

The blank tender forms containing terms and conditions, item wise quantity, detailed drawings and directions, will be issued in the office of the Executive Engineer Minor Irrigation Division, Belgaum from 27.7.2005 to 28.7.2005 in the office working hours. If the tender forms are to be issued by post, a self addressed cloth lined cover of size 35 cm. x 20.5 cm. duly affixing Rs. 150/- stamps should be furnished along with the application form. This Department is not responsible for the delay in postal service.

The designs, drawings and other details related to the contract, can be verified during the office hours. If the dates mentioned above happens to be a General Holiday or declared Holiday, the next working day will be considered.

The tenders shall submitted in two parts viz. (i) "Technical Bid-Part I" (ii) "Financial Bid-Part II". In part-II, Contractors shall quote the rates for the items included in the prescribed Schedule B form without altering, changing anything in the blank tender booklets.

**The following particulars and details shall be furnished in Part-I, Technical Bid.**

1. At the time of award of the contract each tenderer in his name should have in the past five years i.e. 2000-01 to 2004-05.

a. Achieved in at least two financial years, a minimum annual financial turnover of 1) Rs. 180.00 lakhs (For work at Sl. No. 1, 2) Rs. 173.00 lakhs (For work at Sl. No. 2) (All Civil Engineering construction work only).
b. Satisfactorily completed as a prime contractor similar type of work i.e. construction of minor irrigation tank, not less than 90% of contract value i.e. 1) Rs. 81.00 lakhs (For work at Sl. No. 1, 2) Rs. 77.50 lakhs (For work at Sl. No. 2)
c. Executed in any one year following minimumquantities of work.

| | | (For work at Sl No 1) | (For work at Sl No 2) |
|---|---|---|---|
| A) | Excavation | 19700 Cum | 11000 Cum |
| B) | Embankment work | 19300 Cum | 28950 Cum |
| C) | Cement Concrete | 1430 Cum | 563 Cum |

**Tenderer should demonstrate following capacities**

a. Availability (either owned or leased) of the following key and critical equipments for the work if leased General Power of Attorney to be enclosed.
   1. Excavator/Poclain (0.90 Cum Capacity) 2 Nos
   2. Lorry/Tipper 8 Nos
   3. Concrete Mixer 2 Nos
   4. Road roller 2 Nos
   5. Dewatering pumps 4 Nos
b. Certificate regarding availability for this work, of a project manager with no less than 5 years experience in execution of similar work and other experienced staff.
c. Liquid Assets and or/availability of credit facilities of no less than Rs. 25.00 lakhs (Credit lines) letter of credit certified from Banks, for meeting the funds requirements for this work.

2. The tenderer shall furnish the documents of availability of experienced technical staff.

The list of qualified bidders in Technical bid will be published on notice board of Executive Engineer, Minor Irrigation Division, Belgaum.

The technical bid Part-I will be opened at first instance and evaluation will be done and then the Part-II (of the qualified tenderer's) will be opened on the fixed date as per the direction of the Higher Authorities.

The other conditions of the Bid are will be as per PWG 65, PWG 66, Karnataka Transparency in public procurement Act 1999, 2000 and G.O. No. PWG 1359 So FC 2001 (P2) W Dt. 3.12.2002.

| Sl. No. | Name of Work | Estimated Cost Rs. in Lakhs | E.M.D., Rs. in Lakhs | Cost of tender form excluding taxes (Not refundable) Rs. | Time limit for the completion of work excluding the monsoon | Class of Contractor |
|---|---|---|---|---|---|---|
| 1. | Construction of M.I.Tank near Naganur Taluka Hulkkeri Dist Belgaum. | 90.62 | 0.906 | 9000 + Tax | 12 Months | Class - I (Civil) |
| 2. | Construction of M.I.Tank near Shettihalli Taluka Hukkeri Dist Belgaum. | 86.30 | 0.863 | 8600 + Tax | 12 Months | Class - I (Civil) |

**Please Note**

1. The department reserves the right to reject any or all the tender/tenders without assigning any reasons whatsoever.
2. E.M.D. shall be furnished in the form of Fixed deposit/Bank Guarantee duly superscribing name of work / or NSC pledged in favour of undersigned.
3. Tender validity period will be for 90 days and E.M.D. should be for same period.
4. While applying for the tender forms, the contractor shall furnish the current Registration copy and fresh renewals if any along with income tax and sales tax clearance certificates (original copies should be produced) for verification and copies should be duly attested and certified by the Gazetted officers/Notary.
5. All tenderers who receive blank tender forms shall participate in the tender along with prescribed EMD. If not the defaulted name of contractors will be Black listed.
6. The tenderers shall show the pass bok issued by Registering Authority at the time of receipt of blank tender forms.

7. The department is not responsible for the any compensation and claims regarding delay in land Acquisition.
8. Contractor shall make their own arrangement for purchase of Steel, Cement, pipes essential for the work at their own cost with quality control tests approved.
9. Work bills will be paid depending upon the availability of grant and LOC for the year and no room for any compensation & claims and contractor should not stop the work for non-payment of bills.
10. Tenderers shall inspect the site of work before participating in the tender process. This department is not responsible for any dispute regarding site of work.

**R. NAGARAJ**
P.R. 376 Executive Engineer, M.I. Division, Belgaum

**WATER RESOURCES M.I. DEPARTMENT**
**Office of the Executive Engineer, M.I.Division, Bidar**
**Tender Notification**
**No.EE/MID/BDR/TS.3,4/Tender/PTC./2005-06/1931, Dated:24th June 2005**

Sealed Item Rate Tenders in duplicate in PWG Form 65,66 are invited from the registered Civil Contractors for the following works.

| Sl. No. | Name of Works | Approximate Amount of work put to tender | Earnest Money Deposit (EMD) | Cost of blank tender schedule (Non refundable) | Class of contractor eligible. |
|---|---|---|---|---|---|
| 1. | Construction of Percolation Tank near Rampur Village in Humnabad Taluka, Bidar District. | Rs. 27.00 Lakhs | Rs. 27000.00 | Rs. 6000.00 Plus Taxes | Class-I |
| 2. | Construction of Percolation Tank near Bhadrapur Village in Humnabad Taluka, Bidar District | Rs. 18.00 Lakhs. | Rs. 27000.00 | Rs. 5000.00 Plus Taxes | Class-II & above. |
| 3. | Construction of Percolation Tank Near Hattiyal Village in Basavakalyan Taluka, Bidar District. | Rs. 23.50 Lakhs | Rs. 23500.00 | Rs.6000.00 Plus Taxes | Class-II & above. |
| 4. | Construction of Percolation Tank Near Karigonda thanda in Basavakalyan Taluka, Bidar District. | Rs. 24.50 Lakhs | Rs. 24500.00 | Rs. 6000.00 Plus Taxes | Class-II & above. |

The period allotted to each of the above works is **4 (Four) months excluding mansoon.**

The calendar of events for all the four works is as below.

| | | | |
|---|---|---|---|
| 1) | Last date for submitting application for Blank tender schedules | - | 30.7.2005 |
| 2) | Date of Issue of Blank tender Schedules | - | 09.08.2005 & 10.08.2005 |
| 3) | Date of submission of filled Tender Schedules | - | 18.08.2005 up to 4.00 P.M. |
| 4) | Date of Opening the Tenders (if possible) | - | 18.08.2005 at 5.00 P.M. |

**Conditions**

1) The requisite E.M.D. in the shape of D.D/F.D.R/Banker's cheque drawn on scheduled Bank or N.S.C. pledged in Favour of Executive Engineer, M.I. Division, Bidar Shall be submitted at the time of receiving blank Tender Schedules. The same should be valid for a minimum period of 90 days from the date of opening.
2) The Tenderer shall enclose the copy of Registration to the application. Original Registration Pass Boook shall be produced at the time of receiving blank Tender Schedules.
3) Cost of Blank Tender schedules will not refunded in any case.
4) Right to Reject any or all the tenders is reserved.
5) In case of Postal transaction of tenders, this office will not be responsible for postal delay.
6) If any of the above mentioned dates fall on General Holidays, immediately next date will hold good.

**GUNDAPPA CHILLALE**
P.R. 377 Executive Engineer, M.I. Division, Bidar.

**ಕಮಾಂಡೆಂಟ್‌ರವರ ಕಾರ್ಯಾಲಯ,**

**3ನೇ ಪಡೆ, ಕೆ.ಎಸ್.ಆರ್.ಪಿ. ಕೋರಮಂಗಲ, ಬೆಂಗಳೂರು-34**

**ಟೆಂಡರ್ / ಬಹಿರಂಗ ಹರಾಜು**

**ಸಂಖ್ಯೆ:03/ಲೆಕ್ಕ-3/2005-06, ದಿನಾಂಕ: 1ನೇ ಜುಲೈ 2005**

**ವಿಷಯ:** ಅನುಪಯುಕ್ತಗೊಳಿಸಿರುವ 1 ಸಂಖ್ಯೆ ಪೊಲೀಸ್ ವಾಹನವನ್ನು ದಿ:30.7.2005ರಂದು ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ನಡವಳಿ ಆದೇಶ ಸಂ: ಹೆಚ್‌ಡಿ/3/ಇಎಂವಿ/2004, ಬೆಂಗಳೂರು, ದಿನಾಂಕ: 12.5.2005.

2. ಮಾನ್ಯ ಡಿಜಿ ಮತ್ತು ಐಜಿಪಿ, ಕರ್ನಾಟಕ ರಾಜ್ಯ ಬೆಂಗಳೂರು ರವರ ಹಿಂಬರಹ ಆದೇಶ ಸಂ:ವಾಸಾ(1)/58/2002-03, ದಿನಾಂಕ: 9.6.2005.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 3ನೇ ಪಡೆ, ಕೆ.ಎಸ್.ಆರ್.ಪಿ. ಕೋರಮಂಗಲ, ಬೆಂಗಳೂರು-34ರ ಘಟಕದ ಈ ಕೆಳಕಂಡ 1 ಸಂಖ್ಯೆ ನಿರುಪಯುಕ್ತ ಪೊಲೀಸ್ ವಾಹನವನ್ನು ದಿ:30.7.2005ರಂದು ಬೆಳಿಗ್ಗೆ 11-00 ಗಂಟೆಗೆ 3ನೇ ಪಡೆ, ಕೆ.ಎಸ್.ಆರ್.ಪಿ., ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು.

**ಹರಾಜು ಮಾಡಲು ಉದ್ದೇಶಿಸಿರುವ ನಿರುಪಯುಕ್ತ ವಾಹನದ ವಿವರಗಳು**

| ಕ್ರ. ಸಂ. | ವಾಹನದ ನೋಂದಣಿ ಸಂಖ್ಯೆ | ಉತ್ಪಾದಕರು | ಉತ್ಪಾದಕ ವರ್ಷ | ವಾಹನಗಳ ವಿಧ | ಇಂಧನ ಬಳಕೆ |
|---|---|---|---|---|---|
| 1 | ಸಿಎಜಿ 998 | ಬೆಡ್‌ಫೋರ್ಡ್ | 1983 | ಬಸ್ | ಡೀಸಲ್ |

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1) ಮೊಹರು ಮಾಡಿದ ಟೆಂಡರ್ (ಸೀಲ್ಡ್ ಕವರ್) ಲಕೋಟೆಯನ್ನು ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ, ಬೆಂಗಳೂರುರವರ ವಿಳಾಸಕ್ಕೆ **"ಅನುಪಯುಕ್ತ ವಾಹನದ ಖರೀದಿಗಾಗಿ ಟೆಂಡರ್"** ಎಂದು ಬರೆದು ಕಳುಹಿಸಬೇಕು.
2) ಅತೀ ಹೆಚ್ಚಿನ ಬೆಲೆಯನ್ನು ಅಂಕಿ ಮತ್ತು ಅಕ್ಷರದಲ್ಲಿ ಬರೆದಿರಬೇಕು.
3) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
4) ಬಿಡ್‌ದಾರರು/ಟೆಂಡರ್‌ದಾರರು ರೂ.5000 (ಐದು ಸಾವಿರ)ಗಳನ್ನು ಹರಾಜು ಪ್ರಾರಂಭಿಸುವುದಕ್ಕಿಂತ ಮೊದಲು ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ ಬೆಂಗಳೂರು ರವರ ಹೆಸರಿನಲ್ಲಿ ಠೇವಣಿಯಾಗಿ ಇಡತಕ್ಕದ್ದು.
5) ಹರಾಜು ಮಾಡುವ ಅಧಿಕಾರಿಯವರು ಯಾವುದೇ ಕಾರಣವಿಲ್ಲದೆ ಬಿಡ್‌ನ್ನು ಮುನ್ಸೂಚನೆಯಿಲ್ಲದೆ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹೊಂದಿರುತ್ತಾರೆ.
6) ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 29.7.2005ರ ಅಪರಾಹ್ನ 17-00 ಘಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.
7) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಕಮಾಂಡೆಂಟ್‌ರವರು ಸಾರ್ವಜನಿಕರ ಸಮಕ್ಷಮದಲ್ಲಿ ಸೀಲ್ಡ್ ಕವರ್ ತೆರೆದು ಬಹಿರಂಗ ಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್ / ಸವಾಲುದಾರರೆಂದು ಪರಿಗಣಿಸಲಾಗುವುದು.
8) ಯಶಸ್ವಿಯಾದ ಟೆಂಡರ್‌ದಾರರು / ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡ 25 ರಷ್ಟು ಹಣವನ್ನು (ಠೇವಣಿ ಹೊರತುಪಡಿಸಿ) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು ಮಾನ್ಯ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಬೆಂಗಳೂರುರವರು ಸದರಿ ದರವನ್ನು ಒಪ್ಪಿದನಂತರವೆ ಸಂಪೂರ್ಣ ಹಣವನ್ನು (ತೆರಿಗೆ ಸೇರಿ) ಪಾವತಿ ಮಾಡಿ ಹರಾಜಿನಲ್ಲಿ ಪಡೆಯಲಾದ ವಾಹನವನ್ನು 3 ದಿನಗಳೊಳಗಾಗಿ ತಮ್ಮ ಸ್ವಂತ ಖರ್ಚಿನಿಂದ ತೆಗೆದುಕೊಂಡು ಹೋಗುವುದು. ತಪ್ಪಿದಲ್ಲಿ ಅವರು ತುಂಬಿರುವ ಶೇಕಡ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ಸದರಿ ವಾಹನಗಳನ್ನು ಮರು ಹರಾಜು ಮಾಡಲಾಗುವುದು.
9) ಎಲ್ಲಾ ಹಣವನ್ನು ಕಮಾಂಡೆಂಟ್‌ರವರ ಕಛೇರಿಗೆ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳ ಮೂಲಕ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.
10) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್/ಸವಾಲುದಾರರಿಗೆ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು.
11) ಸರ್ಕಾರದ ವಾಹನಗಳ ಹರಾಜಿನಲ್ಲಿ ಭಾಗವಹಿಸುವ ಟೆಂಡರ್/ಸವಾಲುದಾರರು ಸರ್ಕಾರಿ ನಿಯಮವನ್ನು ಪಾಲಿಸಬೇಕು.
12) ಮೋಟಾರು ವಾಹನಗಳ ತೆರಿಗೆಯನ್ನು ಚಾಲ್ತಿಯಲ್ಲಿರುವ ದರ/ನಿಯಮಗಳ ಮೇಲೆ ವಸೂಲು ಮಾಡಲಾಗುವುದು.
13) ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್:ಸವಾಲುದಾರರು ಮುಂಗಡವಾಗಿ ಕಟ್ಟಲ್ಪಟ್ಟ ಠೇವಣಿ ಹಣದಲ್ಲಿ ವಸೂಲಿ ಮಾಡುವ ಅಧಿಕಾರವು ಕಮಾಂಡೆಂಟ್‌ರವರ ತೀರ್ಮಾನಕ್ಕೆ ಒಳಪಟ್ಟಿರುತ್ತದೆ. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ತೆಗೆದುಕೊಳ್ಳಲಾಗುವುದು.
14) ಹರಾಜಿನಲ್ಲಿ ಯಾವುದೇ ಟೆಂಡರ್ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕಮಾಂಡೆಂಟ್‌ರವರು ಹೊಂದಿರುತ್ತಾರೆ.
15) ವಾಹನವನ್ನು ಹೇಗಿದೆಯೋ ಹಾಗೆ ಈಗ ಇರುವ ಸ್ಥಳದಲ್ಲಿಯೇ ಹರಾಜು ಮಾಡಲಾಗುವುದು.
16) ಮೇಲೆ ತಿಳಿಸಿರುವ ಹರಾಜಿನ ದಿಸೆಯಿಂದ ಯಾವುದೇ ತರಹದ ವಾದ ವಿವಾದಗಳು ಉದ್ಭವಿಸಿದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು ಕೆ.ಎಸ್.ಆರ್.ಪಿ., ಬೆಂಗಳೂರು ರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
17) ಇಚ್ಛೆಯುಳ್ಳ ಟೆಂಡರ್/ಸವಾಲುದಾರರು ಹರಾಜು ಮಾಡಲಿರುವ ನಿರುಪಯುಕ್ತ ವಾಹನವನ್ನು ಯಥಾಸ್ಥಿತಿಯಲ್ಲಿ ಕಮಾಂಡೆಂಟ್‌ರವರ ಕಛೇರಿ, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಈ ಘಟಕದ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.

ಪಿ.ಆರ್. 378 ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು - 34.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಲಾಲ್‌ಬಾಗ್, ಬೆಂಗಳೂರು

## ಟೆಂಡರ್ ಪ್ರಕಟಣೆ

**ಸಂ:ತೋಉನಿ/ತೋಮಾಕೆ/ವಿನಿ1/33/05-06, ಬೆಂಗಳೂರು, ದಿನಾಂಕ: 7ನೇ ಜುಲೈ 2005**

**ವಿಷಯ:** ಕಿರುಪುಸ್ತಕಗಳು, ಬ್ರೋಚರ್‌ಗಳು ಮತ್ತು ಹಸ್ತಪ್ರತಿಗಳನ್ನು ಮುದ್ರಿಸಿ ಸರಬರಾಜು ಮಾಡಲು ಟೆಂಡರ್ ಆಹ್ವಾನಿಸುವ ಬಗ್ಗೆ.

2005-06ನೇ ಸಾಲಿಗೆ ಈ ಕೆಳಕಂಡಂತೆ ಐಟಂವಾರು ಪ್ರತ್ಯೇಕವಾಗಿ ಮುದ್ರಿಸಿ ಸರಬರಾಜು ಮಾಡಲು, ಆಸಕ್ತ ಮುದ್ರಕರಿಂದ ಮೊಹರು ಮಾಡಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್ ಫಾರಂ ಅನ್ನು ದಿನಾಂಕ 25.7.05 ರಿಂದ ದಿನಾಂಕ 6.8.05 ರವರೆಗೆ ವಿತರಣೆ ಮಾಡಲಾಗುವುದು. ಹಾಗೂ ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು ದಿನಾಂಕ 8.8.05 ಮಧ್ಯಾಹ್ನ 3.00 ಗಂಟೆಯೊಳಗೆ ಈ ಕೆಳಸಹಿದಾರರ ಕಛೇರಿಗೆ ಸಲ್ಲಿಸಬೇಕು. ಅದೇ ದಿನ ಸಂಜೆ 5.30 ಗಂಟೆಗೆ ಹಾಜರಿದ್ದ ಟೆಂಡರ್‌ದಾರರು ಸಮ್ಮುಖದಲ್ಲಿ ಇಲ್ಲದಿದ್ದಲ್ಲಿ ಇಲಾಖೆಯ ಅಧಿಕಾರಿ/ನೌಕರರ ಸಮ್ಮುಖದಲ್ಲಿ ತೆರೆಯಲಾಗುವುದು. ಪ್ರತಿಯೊಂದು ಐಟಂ ಮುದ್ರಣಕ್ಕೆ ಪ್ರತ್ಯೇಕ ಟೆಂಡರ್ ಸಲ್ಲಿಸತಕ್ಕದ್ದು.

**ಮುದ್ರಿಸಬೇಕಾದ ಐಟಂವಾರು ವಿವರ:**

**I. ಕಿರು ಪುಸ್ತಕಗಳು:**

1. ಕಿರು ಪುಸ್ತಕಗಳು 1/8 ಅಳತೆಯುಳ್ಳದ್ದಾಗಿದ್ದು 8 ರಿಂದ 20 ಪುಟಗಳನ್ನು ಹೊಂದಿರಬೇಕು.
2. ಮುದ್ರಣಕ್ಕೆ ಮ್ಯಾಪ್‌ಲಿಥೊ ಕಾಗದವನ್ನು ಉಪಯೋಗಿಸುವುದು, ವಿಷಯವನ್ನು ಒಂದೇ ವರ್ಣದಲ್ಲಿ ಮುದ್ರಿಸುವುದು. ಫೋಟೋಗಳನ್ನು ಬಹುವರ್ಣದಲ್ಲಿ ಮುದ್ರಿಸುವುದು.
3. ರಕ್ಷಾಪುಟವನ್ನು ಬಹುವರ್ಣದಲ್ಲಿ 170 ಜಿ.ಎಸ್.ಎಂ. ಆರ್ಟ್ ಪೇಪರ್‌ನಲ್ಲಿ ಫೋಟೋ ಸಹಿತ ಮುದ್ರಿಸುವುದು ಹಾಗೂ ದರವನ್ನು ಪ್ರತ್ಯೇಕವಾಗಿ 1,000, 2,000, 3,000, 5,000 ಪ್ರತಿಗಳಿಗೆ ನಮೂದಿಸುವುದು.
4. ದರವನ್ನು ಹೆಚ್ಚುವರಿ ಅಥವಾ ಕಡಿಮೆ 2 ಪುಟಕ್ಕೆ ಪ್ರತ್ಯೇಕವಾಗಿ ಮುದ್ರಿಸುವುದು.

**II. ಬ್ರೋಚರ್‌ಗಳು:**

1. 1/4 ಅಳತೆಯ ಬ್ರೋಚರ್‌ಗಳು 1 ಮಡಿಕೆ, 2 ಮಡಿಕೆ, 3 ಮಡಿಕೆಗಳಿಗೆ ಪ್ರತ್ಯೇಕವಾಗಿ ದರ ನಮೂದಿಸುವುದು.
2. ಮುದ್ರಣಕ್ಕೆ 170 ಜಿ.ಎಸ್.ಎಂ. ಆರ್ಟ್ ಪೇಪರ್ ಉಪಯೋಗಿಸಿ ಇಲಾಖೆಯು ನೀಡುವ ಫೋಟೋ ಸಹಿತ ಬಹುವರ್ಣಲ್ಲಿ ಡಿಸೈನ್ ಮಾಡಿ ಮುದ್ರಿಸುವುದು. ಹಾಗೂ ದರವನ್ನು ಪ್ರತ್ಯೇಕವಾಗಿ 1,000, 2,000, 3,000, 5,000 ಪ್ರತಿಗಳಿಗೆ ನಮೂದಿಸುವುದು.
3. ಗ್ಲಾಸ್ ಫಿನಿಷಿಂಗ್ ಇರಬೇಕು.
4. ಲ್ಯಾಮಿನೇಷನ್ ಮಾಡಿದಲ್ಲಿ ದರವೆಷ್ಟಾಗುತ್ತದೆಂಬ ಬಗ್ಗೆ ದರ ಪ್ರತ್ಯೇಕವಾಗಿ ನಮೂದಿಸಬೇಕು.

**III. ಹಸ್ತಪ್ರತಿಗಳು:**

1. 24 ಸೆಂ.ಮೀ. ಉದ್ದ 12 ಸೆಂ.ಮೀ ಅಗಲ ಅಳತೆಯಲ್ಲಿ ಹಸ್ತಪ್ರತಿಗಳನ್ನು ಉತ್ತಮ ಮ್ಯಾಫ್‌ಲಿಥೋ ಕಾಗದದಲ್ಲಿ ಒಂದು ವರ್ಷದಲ್ಲಿ ಆಫ್‌ಸೆಟ್ ಮುದ್ರಣದಲ್ಲಿ ಒಂದು ಮಡಿಕೆ, 2 ಮಡಿಕೆ, 3 ಮಡಿಕೆಗಳಲ್ಲಿ ಮುದ್ರಿಸಬೇಕು.
2. 24 ಸೆಂ.ಮೀ. x 12 ಸೆಂ.ಮೀ ಅಳತೆಯಲ್ಲಿ 70 ಜಿ.ಎಸ್.ಎಂ. ಇಂಡಿಯನ್ ಆರ್ಟ್ ಪೇಪರ್‌ನಲ್ಲಿ 4 ವರ್ಣಗಳಲ್ಲಿ ಗ್ಲಾಸ್ ಫಿನಿಷಿಂಗ್‌ನಲ್ಲಿ ಮುದ್ರಿಸಲು ಸಹ ದರವನ್ನು ಪ್ರತ್ಯೇಕವಾಗಿ ನಮೂದಿಸಬೇಕು.
3. 1,2,3 ಮಡಿಕೆಗಳಲ್ಲಿ 1,000, 2,000, 3,000, 5,000 ಸಂಖ್ಯೆವಾರು ಪ್ರತಿಗಳಿಗೆ ಪ್ರತ್ಯೇಕವಾಗಿ ದರ ನಮೂದಿಸಬೇಕು.
4. ಹಸ್ತಪ್ರತಿಗಳಲ್ಲಿ ಅಚ್ಚಾಗಬೇಕಾದ ವರ್ಣ ಫೋಟೋ ಅಥವಾ ಕಪ್ಪು ಬಿಳುಪು ಫೋಟೋಗಳಿಗೆ ದರ ಸೇರಿರಬೇಕು.
5. ದರವನ್ನು ಕಪ್ಪು, ಬಿಳುಪು ಹಾಗೂ ಬಹುವರ್ಣ ಮುದ್ರಣಕ್ಕೆ ಪ್ರತ್ಯೇಕವಾಗಿ ಮಡಿಕೆವಾರು, ಸಂಖ್ಯೆವಾರು ನಮೂದಿಸುವುದು.

**ನಿಯಮ ಹಾಗೂ ಷರತ್ತುಗಳು:**

1. ದರವನ್ನು ಈ ಕಛೇರಿಯಿಂದ ಪಡೆದ ಟೆಂಡರ್ ಫಾರಂಗಳಲ್ಲಿ ಮಾತ್ರ ನಮೂದಿಸಬೇಕು. ಕೆಲಸದ ಆದೇಶ ನೀಡಿದ 8 ದಿನಗಳೊಳಗೆ ಕರಡು ಪ್ರತಿಯನ್ನು ನೀಡಿ, ಕೆಳಸಹಿದಾರರು ಅಂತಿಮ ಕರಡು ಪರಿಶೀಲನೆ ನಡೆಸಿ ಅನುಮೋದಿಸಿದ ನಂತರ 15 ದಿನಗಳೊಳಗೆ ಮುದ್ರಿಸಿ ಸರಬರಾಜು ಮಾಡಬೇಕು.
2. ಪ್ರತಿ ಐಟಂಗೂ ಪ್ರತ್ಯೇಕ ಟೆಂಡರ್ ಫಾರಂ ಅನ್ನು ಉಪಯೋಗಿಸತಕ್ಕದ್ದು.
3. ಪ್ರತಿಯೊಂದು ಟೆಂಡರ್ ಫಾರಂ ಜೊತೆ ರೂ.5,000=00 ಗಳ ಮೌಲ್ಯದ ಡಿ.ಡಿ.ಯನ್ನು ತೋಟಗಾರಿಕೆ ಉಪ ನಿರ್ದೇಶಕರು, ತೋಟಗಾರಿಕೆ ಮಾಹಿತಿ ಕೇಂದ್ರ, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದು ಇ.ಎಂ.ಡಿ. ಆಗಿ ಲಗತ್ತಿಸಬೇಕು.
4. ಮುದ್ರಣಕ್ಕೆ ತಗಲುವ ಒಟ್ಟು ವೆಚ್ಚದ ಮೇಲೆ ಹಾಲಿ ಜಾರಿಯಲ್ಲಿರುವ ದರಗಳಲ್ಲಿ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆಯನ್ನು ಮೂಲದಲ್ಲಿಯೇ ಕಟಾಯಿಸಲಾಗುವುದು.
5. ಯಾವುದೇ ಕಾರಣಕ್ಕೂ ಮುಂಗಡ ನೀಡಲಾಗುವುದಿಲ್ಲ.
6. ಸಂಪೂರ್ಣ ಕೆಲಸವು ಕೆಳಸಹಿದಾರರು ಒಪ್ಪುವಂತಿರಬೇಕು.
7. ಯಾವುದೇ ಕಾರಣ ನೀಡದೆ ಟೆಂಡರ್ ಅನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಕೆಳಸಹಿದಾರರಿಗಿರುತ್ತದೆ.
8. ಟೆಂಡರ್ ಅನ್ನು ಇರಿಸಿದ ಲಕೋಟೆ ಮೇಲೆ **"..................................................ಗಾಗಿ ಟೆಂಡರ್"** ಎಂದು ನಮೂದಿಸಬೇಕು. ಹಾಗೂ ಟೆಂಡರ್‌ದಾರರ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಬೇಕು.
9. ಟೆಂಡರ್‌ನಲ್ಲಿ ನಮೂದಿಸಿದ ದರವು ದಿನಾಂಕ: 31.3.06 ರವರೆಗೆ ಅನ್ವಯಿಸುವಂತಿರಬೇಕು.

ತೋಟಗಾರಿಕೆ ಉಪ ನಿರ್ದೇಶಕರು,
ತೋಟಗಾರಿಕೆ ಮಾಹಿತಿ ಕೇಂದ್ರ, ಲಾಲ್‌ಬಾಗ್, ಬೆಂಗಳೂರು.

ಪಿ.ಆರ್. 387

